## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 858
ಮಾನ್ಯ ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 20-12-2021
ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

* * *

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕೋವಿಡ್ ರೂಪಾಂತರ ಹೊಂದಿದ ಒಮಿಕ್ರಾನ್ ಸಾಂಕ್ರಾಮಿಕ ರೋಗದಿಂದ ಆಗುವ ಅನಾಹುತಗಳನ್ನು ತಪ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಕೋವಿಡ್ ರೂಪಾಂತರ ಹೊಂದಿದ ಒಮಿಕ್ರಾನ್ ಸಾಂಕ್ರಾಮಿಕ ರೋಗವು ಹರಡದಂತೆ ಸರ್ಕಾರವು ಕೈಗೊಂಡಿರುವ ಕ್ರಮಗಳು ಈ ಕೆಳಗಿನಂತಿವೆ:<br>1. ಭಾರತ ಸರ್ಕಾರದ ಮಾರ್ಗಸೂಚಿಯಂತೆ, ಎಲ್ಲಾ ಅಂತರರಾಷ್ಟ್ರೀಯ ಪ್ರಯಾಣಿಕರು ಕರ್ನಾಟಕಕ್ಕೆ ಆಗಮಿಸುವ ಮೊದಲು 'ಏರ್ ಸುವಿಧಾ" ಪೋರ್ಟಲ್‌ನಲ್ಲಿ, 72 ಗಂಟೆಗಳ ಒಳಗೆ ಮಾಡಿಸಿದ ಆರ್‌ಟಿಪಿಸಿಆರ್ ನೆಗೆಟಿವ್ ವರದಿಯನ್ನು ಅಪ್ ಲೋಡ್ ಮಾಡುವುದು ಕಡ್ಡಾಯವಾಗಿರುತ್ತದೆ.<br>2. ಭಾರತ ಸರ್ಕಾರವು ಸೂಚಿಸಿರುವ At-Risk ದೇಶಗಳಿಂದ ಆಗಮಿಸುವವರು ವಿಮಾನ ನಿಲ್ದಾಣದಲ್ಲಿ ಆರ್‌ಟಿ ಪಿಸಿಆರ್ ಪರೀಕ್ಷೆ ಮಾಡಿಸುವುದು ಕಡ್ಡಾಯವಾಗಿದ್ದು, ನೆಗೆಟಿವ್ ಫಲಿತಾಂಶ ಬಂದವರು ಮಾತ್ರವೇ ವಿಮಾನ ನಿಲ್ದಾಣದಿಂದ ತೆರಳಲು ಅವಕಾಶ ನೀಡಲಾಗುವುದು.<br>3. ಆರ್.ಟಿ.ಪಿ.ಸಿ.ಆರ್ ಪಾಸಿಟಿವ್ ಫಲಿತಾಂಶ ಬಂದವರನ್ನು ಶಿಷ್ಠಾಚಾರದ ಅನ್ವಯ ನಿಗದಿತ ಆಸ್ಪತ್ರೆಗೆ ದಾಖಲು ಮಾಡಿ ಅಗತ್ಯ ಚಿಕಿತ್ಸೆ ನೀಡಲು ವ್ಯವಸ್ಥೆ ಮಾಡಲಾಗಿದೆ.<br>4. ಪಾಸಿಟಿವ್ ಪ್ರಕರಣಗಳ ಸೂಕ್ತ ಚಿಕಿತ್ಸೆಗಾಗಿ ಸರ್ಕಾರಿ ಹಾಗೂ ಖಾಸಗಿ ಆಸ್ಪತ್ರೆಗಳನ್ನು ಗುರುತಿಸಲಾಗಿದ್ದು, ಚಿಕಿತ್ಸಾ ಶಿಷ್ಠಾಚಾರವನ್ನೂ ಸಹ ಹೊರಡಿಸಲಾಗಿದೆ.<br>5. ಇಂತಹ ಪ್ರಕರಣಗಳ ಮಾದರಿಯನ್ನು ಜೀನೋಮ್ ಸೀಕ್ವೆನ್ಸಿಂಗ್ ಪರೀಕ್ಷೆಗಾಗಿ INSACOG ಪ್ರಯೋಗಶಾಲೆಗೆ ಕಳುಹಿಸಿ ಆದ್ಯತೆಯ ಮೇಲೆ ಪರೀಕ್ಷೆ ಮಾಡಲಾಗುತ್ತಿದೆ.<br>6. ಆರ್‌ಟಿಪಿಸಿಆರ್ ನೆಗೆಟಿವ್ ಫಲಿತಾಂಶ ಬಂದ ಪ್ರಯಾಣಿಕರನ್ನು ಆಯಾ ಜಿಲ್ಲೆಗಳಲ್ಲಿ ಹೋಂ ಕ್ವಾರೆಂಟೈನ್‌ನಲ್ಲಿಟ್ಟು, 8ನೇ ದಿನದಂದು ಆರ್‌ಟಿ ಪಿಸಿಆರ್ ಪರೀಕ್ಷೆ ನಡೆಸಲಾಗುತ್ತಿದೆ. ಇಂತಹ ಪ್ರಕರಣಗಳಲ್ಲಿ ಪಾಸಿಟಿವ್ ಬಂದವರಿಗೆ ಶಿಷ್ಠಾಚಾರದಂತೆ ಚಿಕಿತ್ಸೆ ನೀಡಲಾಗುತ್ತಿದೆ.<br>7. ತಜ್ಞರ ಶಿಫಾರಸ್ಸಿನಂತೆ, ರಾಜ್ಯದ ಆಸ್ಪತ್ರೆಗಳಲ್ಲಿ ಅಗತ್ಯ ಸಂಖ್ಯೆಯ ಬೆಡ್‌ಗಳು, ಐಸಿಯು, ವೆಂಟಿಲೇಟರ್ ಹಾಗೂ ಇತರ ಸೌಲಭ್ಯಗಳನ್ನು ಉನ್ನತೀಕರಿಸಲಾಗಿದೆ.<br>8. ಕೋವಿಡ್ ಪ್ರಕರಣಗಳ ಚಿಕಿತ್ಸೆಗಾಗಿ ಅಗತ್ಯ ಪ್ರಮಾಣದ ಔಷಧಿಗಳನ್ನು ಪೂರೈಸಲಾಗಿದೆ. |
| ಆ | ಜನರು ಈ ಬಗ್ಗೆ ಭಯಭೀತರಾಗಿ ಆತಂಕಗೊಳಗಾಗಿರುವುದರಿಂದ ಅವರ ರಕ್ಷಣೆಗೆ ಹಮ್ಮಿಕೊಂಡಿರುವ | ಜನರು ಈ ಬಗ್ಗೆ ಭಯಭೀತರಾಗಿ ಆತಂಕಗೊಳಗಾಗಿರುವುದರಿಂದ, ಅವರ ರಕ್ಷಣೆಗೆ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ರೂಪುರೇಷೆಗಳು ಈ ಕೆಳಗಿನಂತಿವೆ.<br>1. ತಜ್ಞರ ಸಮಿತಿಯು ಕಾಲಕಾಲಕ್ಕೆ ನೀಡುವ ಸೂಚನೆಗಳನ್ನು, ಸಾರ್ವಜನಿಕರ ಆರೋಗ್ಯದ ಹಿತದೃಷ್ಟಿಯಿಂದ ಅನುಷ್ಠಾನಗೊಳಿಸಲಾಗುತ್ತಿದೆ. |

| | | |
|---|---|---|
| | ಕಾರ್ಯಕ್ರಮಗಳ ರೂಪುರೇಷೆಗಳೇನು; (ವಿವರ ನೀಡುವುದು) | 2. ಸಾರ್ವಜನಿಕರು ಒಮಿಕ್ರಾನ್ ಸೋಂಕಿನ ಕುರಿತು ಅನಗತ್ಯ ಭಯಪಡದಂತೆ ಹಾಗೂ ಕೋವಿಡ್ 19 ಮುನ್ನೆಚ್ಚರಿಕೆ ಕ್ರಮಗಳನ್ನು (Covid Appropriate Behaviour – CAB) ಸಮಗ್ರವಾಗಿ ಪಾಲಿಸುವಂತೆ, ಮಾಧ್ಯಮಗಳ ಮೂಲಕ ವ್ಯಾಪಕ ಪ್ರಚಾರವನ್ನು ನೀಡಲಾಗುತ್ತಿದೆ.<br>3. ಆರ್‌ಟಿಪಿಸಿಆರ್ ಪರೀಕ್ಷೆಯಲ್ಲಿ ಪಾಸಿಟಿವ್ ಬಂದ ಪ್ರಕರಣಗಳ ಮಾದರಿಗಳನ್ನು ಜೀನೋಮ್ ಸೀಕ್ವೆನ್ಸಿಂಗ್ ಪರೀಕ್ಷೆಗಾಗಿ INSACOG ಪ್ರಯೋಗಶಾಲೆಗೆ ಕಳುಹಿಸಿ ಆದ್ಯತೆಯ ಮೇಲೆ ಪರೀಕ್ಷೆ ಮಾಡಲಾಗುತ್ತಿದೆ.<br>4. ತಜ್ಞರ ಶಿಫಾರಸ್ಸಿನಂತೆ, ರಾಜ್ಯದ ಆಸ್ಪತ್ರೆಗಳಲ್ಲಿ ಅಗತ್ಯ ಸಂಖ್ಯೆಯ ಬೆಡ್‌ಗಳು, ಐ.ಸಿ.ಯು, ವೆಂಟಿಲೇಟರ್ ಹಾಗೂ ಇತರ ಸೌಲಭ್ಯಗಳನ್ನು ಉನ್ನತೀಕರಿಸಲಾಗಿದೆ.<br>5. ಕೋವಿಡ್ ಪ್ರಕರಣಗಳ ಚಿಕಿತ್ಸೆಗಾಗಿ ಅಗತ್ಯ ಪ್ರಮಾಣದ ಔಷಧಿಗಳನ್ನು ಪೂರೈಸಲಾಗಿದೆ.<br>6. ಉಳಿದಂತೆ, ರಾಜ್ಯಾದ್ಯಂತ ಕೋವಿಡ್ ಲಸಿಕಾ ಕಾರ್ಯಕ್ರಮವನ್ನು ಸಮರೋಪಾದಿಯಲ್ಲಿ ನಡೆಸಲಾಗುತ್ತಿದೆ.<br>7. ಕೋವಿಡ್-19 ಲಸಿಕೆಯ 2 ಡೋಸ್‌ಗಳನ್ನು ಪಡೆದವರಿಗೆ ಹೋಟೇಲ್, ಲಾಡ್ಜ್ ಹಾಗೂ ರೆಸ್ಟೋರೆಂಟ್‌ಗಳು, ಪಬ್ ಹಾಗೂ ಬಾರ್‌ಗಳು ಸಿನೆಮಾ ಹಾಲ್ ಹಾಗೂ ಆಡಿಟೋರಿಯಂಗಳು, ಶಾಪಿಂಗ್ ಕಾಂಪ್ಲೆಕ್ಸ್ ಹಾಗೂ ಮಾಲ್‌ಗಳು, ಗ್ರಂಥಾಲಯಗಳು, ಈಜುಕೊಳಗಳು, ಮೃಗಾಲಯಗಳು ಹಾಗೂ ಜೈವಿಕ ಉದ್ಯಾನವನಗಳು, ವಸ್ತು ಪ್ರದರ್ಶನ ಸ್ಥಳಗಳು, ಇತ್ಯಾದಿಗಳಲ್ಲಿ ಪ್ರವೇಶ ನೀಡಲಾಗುತ್ತಿದೆ.<br>8. ರಾಜ್ಯಾದ್ಯಂತ ಸಾರ್ವಜನಿಕ ಸಭೆಗಳು, ಧಾರ್ಮಿಕ ಹಾಗೂ ರಾಜಕೀಯ ಸಭೆ ಸಮಾರಂಭಗಳಲ್ಲಿ ಪಾಲ್ಗೊಳ್ಳುವವರ ಸಂಖ್ಯೆಯನ್ನು 500ಕ್ಕೆ ಮಿತಿಗೊಳಿಸಲಾಗಿದೆ. |
| ಇ | ಶಾಲಾ ಕಾಲೇಜುಗಳನ್ನು ಈಗಾಗಲೇ ನಡೆಸುತ್ತಿದ್ದು, ಇದರಿಂದ ಮಕ್ಕಳಿಗೆ ತೊಂದರೆಯಾಗದಂತೆ ಕೈಗೊಳ್ಳಲಾದ ಮುಂಜಾಗ್ರತಾ ಕ್ರಮಗಳಾವುವು? | ಶಾಲಾ ಕಾಲೇಜುಗಳಲ್ಲಿ ಮಕ್ಕಳಲ್ಲಿ ಸೋಂಕು ಹರಡದಂತೆ ಈ ಕೆಳಕಂಡ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳಲಾಗಿದೆ :<br>1. ಪ್ರವೇಶದ ಸಮಯದಲ್ಲಿ ಎಲ್ಲರನ್ನೂ ಕೋವಿಡ್ ರೋಗಲಕ್ಷಣಗಳಿಗಾಗಿ ಪರೀಕ್ಷಿಸಬೇಕು, ಹ್ಯಾಂಡ್ ಸ್ಯಾನಿಟೈಜರ್‌ನ ಬಳಕೆ, ಥರ್ಮಲ್ ಸ್ಕ್ಯಾನಿಂಗ್ ಮಾಡುವುದು ಮತ್ತು ಕನಿಷ್ಠ ಒಂದು ಮೀಟರ್/ಮೂರು ಅಡಿಗಳ ಭೌತಿಕ ಅಂತರವನ್ನು ಖಚಿತಪಡಿಸಿಕೊಳ್ಳಲಾಗುತ್ತಿದೆ.<br>2. ಸಾಮಾನ್ಯ ಪ್ರದೇಶಗಳಲ್ಲಿದ್ದಾಗ ಕಡ್ಡಾಯವಾಗಿ ಮಾಸ್ಕ್ ಧರಿಸುವಿಕೆ, ಕನಿಷ್ಠ 01 ಮೀಟರ್ ದೈಹಿಕ ಅಂತರ, ಕೈ ಮತ್ತು ಉಸಿರಾಟದ ನೈರ್ಮಲ್ಯ ಮತ್ತು ಒಳಾಂಗಣ ನೈಸರ್ಗಿಕ ವಾತಾಯನ ಇತ್ಯಾದಿಗಳಂತಹ ಕ್ರಮಗಳಿಗೆ ಕಟ್ಟುನಿಟ್ಟಾದ ಅನುಸರಣೆ ಮಾಡಲಾಗುತ್ತಿದೆ.<br>3. ಭೇಟಿ ನೀಡುವ ಸಂದರ್ಶಕರು ಕಡ್ಡಾಯವಾಗಿ 2 ಡೋಸ್ ಲಸಿಕೆ ಪಡೆದಿರುವುದನ್ನು ಕಡ್ಡಾಯ ಪಡಿಸಿಕೊಳ್ಳಲಾಗುತ್ತಿದೆ.<br>4. 18 ವರ್ಷ ಮೇಲ್ಪಟ್ಟ ಎಲ್ಲಾ ಸಿಬ್ಬಂದಿ, ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಎರಡು ಡೋಸ್ ಲಸಿಕೆಯನ್ನು ಪಡೆಯುವುದನ್ನು ಕಡ್ಡಾಯಗೊಳಿಸಲಾಗಿದೆ.<br>5. ರೋಗ ಲಕ್ಷಣಗಳನ್ನು ಹೊಂದಿದವರನ್ನು ತಕ್ಷಣವೇ ಗೊತ್ತುಪಡಿಸಿದ ಕೋಣೆಯಲ್ಲಿ ಪ್ರತ್ಯೇಕಗೊಳಿಸಿ ಆರಂಭದಲ್ಲಿ ರ್‍ಯಾಪಿಡ್ ಟೆಸ್ಟ್ ಮಾಡಿಸುವುದು. ಸದರಿ ಪರೀಕ್ಷೆಯ ಫಲಿತಾಂಶವು ನಕಾರಾತ್ಮಕವಾಗಿದ್ದರೆ, ಐ.ಸಿ.ಎಂ.ಆರ್ ಪ್ರೋಟೋಕಾಲ್ ಪ್ರಕಾರ ಕಡ್ಡಾಯವಾಗಿ ಆರ್.ಟಿ.ಪಿ.ಸಿ.ಆರ್ ಪರೀಕ್ಷೆಗೆ ಒಳಪಡಿಸಲಾಗುವುದು. |

| | | |
|---|---|---|
| | | 6. ತರಗತಿಗಳಿಗೆ ಹಾಜರಾಗುವ ಮೂರು ಅಥವಾ 2ಕ್ಕಿಂತ ಹೆಚ್ಚು ವಿದ್ಯಾರ್ಥಿಗಳು ಪರೀಕ್ಷೆ ಪಾಸಿಟಿವ್ ಆಗಿದ್ದರೆ, ಆಯಾ ತರಗತಿಗಳನ್ನು ಒಂದು ವಾರದವರೆಗೆ ಅಮಾನತ್ತುಗೊಳಿಸಿ, ವಿದ್ಯಾರ್ಥಿಗಳನ್ನು ಪ್ರತ್ಯೇಕಿಸಿ ಚಿಕಿತ್ಸೆ ನೀಡಲಾಗುತ್ತಿದೆ.<br>7. ಎಲ್ಲಾ ಪ್ರಾಥಮಿಕ ಮತ್ತು ಮಾಧ್ಯಮಿಕ ಸಂಪರ್ಕಗಳನ್ನು ಕಡ್ಡಾಯವಾಗಿ ಆರ್‌ಟಿಪಿಸಿಆರ್ ಮೂಲಕ ಪರೀಕ್ಷಿಸಲಾಗುತ್ತಿದೆ.<br>8. ಒಂದು ಶಾಲೆಯಲ್ಲಿ 15ಕ್ಕಿಂತ ಹೆಚ್ಚು ಪ್ರಕರಣಗಳು ಇದ್ದಲ್ಲಿ, ನಂತರ ಶಾಲೆಯನ್ನು ಒಂದು ದಿನದ ಮಟ್ಟಿಗೆ ಮುಚ್ಚಿ ಸಂಪೂರ್ಣವಾಗಿ ಶುಚಿಗೊಳಿಸಬೇಕು ಹಾಗೂ ಎಲ್ಲಾ ಪ್ರಾಥಮಿಕ ಮತ್ತು ಮಾಧ್ಯಮಿಕ ಸಂಪರ್ಕಗಳ ಪರೀಕ್ಷೆ, ಪ್ರತ್ಯೇಕತೆ ಮತ್ತು ಪ್ರಕರಣಗಳ ನಿರ್ವಹಣೆಯ ನಂತರ, ಒಂದು ವಾರದ ನಂತರ ಶಾಲೆಯನ್ನು ಪುನಃ ತೆರೆಯಲಾಗುವುದು.<br>9. ತರಗತಿ ಕೊಠಡಿಗಳನ್ನು 1% ಸೋಡಿಯಂ ಹೈಪೋಕ್ಲೋರೈಟ್ ದ್ರಾವಣವನ್ನು ಮತ್ತು ವಸ್ತುಗಳು ಮತ್ತು ಮೇಲ್ಮೈಗಳನ್ನು 0.5% ಲೈಸೋಲ್ ಬಳಸಿ ಸೋಂಕು ರಹಿತಗೊಳಿಸಿ ತರಗತಿ ಕೊಠಡಿಗಳು 24 ಗಂಟೆಗಳ ನಂತರ ಬಳಸಲು ಸಿದ್ದವಾಗಿಸುವುದು.<br>10. ಆರ್.ಟಿ.ಪಿ.ಸಿ.ಆರ್ ಪರೀಕ್ಷಾ ಮಾದರಿಯ ಸಿ.ಟಿ ಮೌಲ್ಯವು 25ಕ್ಕಿಂತ ಕಡಿಮೆಯಿದ್ದರೆ, ಅಂತಹ ಮಾದರಿಗಳನ್ನು ಒಮಿಕ್ರಾನ್ ರೂಪಾಂತರಿಗಾಗಿ ಜೀನೋಮಿಕ್ ಅನುಕ್ರಮಕ್ಕೆ ಒಳಪಡಿಸುವುದು.<br>11. ಬೋರ್ಡಿಂಗ್ ಶಾಲೆಯಲ್ಲಿ ವಾರ್ಡನ್, ಅಡುಗೆ ಸಿಬ್ಬಂದಿ ಮತ್ತು ಇತರೆ ಸಿಬ್ಬಂದಿ ಲಕ್ಷಣ ರಹಿತರಾಗಿರುವಂತೆ ಕ್ರಮವಹಿಸಿ, ವಾರಕ್ಕೊಮ್ಮೆ ಆರ್.ಟಿ.ಪಿ.ಸಿ.ಆರ್.ಗೆ ಒಳಪಡಿಸಲಾಗುವುದು.<br>12. ಊಟದ ಹಾಲ್‌ನಲ್ಲಿ ಅಂತರವನ್ನು ಕಾಯ್ದುಕೊಳ್ಳುವ ನಿಟ್ಟಿನಲ್ಲಿ ವೇಳಾಪಟ್ಟಿಯನ್ನು ನಿಗಧಿಪಡಿಸಲಾಗಿದೆ.<br>13. ಸ್ನಾನ ಮತ್ತು ಶೌಚಾಲಯಗಳನ್ನು ದಿನಕ್ಕೆ ಎರಡು ಬಾರಿ ಬೆಳಗ್ಗೆ ಮತ್ತು ಸಂಜೆ, 1% ಸೋಡಿಯಂ ಹೈಪೋಕ್ಲೋರೈಟ್ ದ್ರಾವಣವನ್ನು ಬಳಸಿ ಸೋಂಕು ರಹಿತಗೊಳಿಸಲಾಗುತ್ತಿದೆ.<br>14. ವಿಶೇಷ ಕಣ್ಗಾವಲಿನ ಭಾಗವಾಗಿ 2% ವಿದ್ಯಾರ್ಥಿಗಳನ್ನು ಒಂದು ವಾರದಲ್ಲಿ ಪರೀಕ್ಷಿಸಲಾಗುತ್ತಿದೆ.<br>15. ತಾಲ್ಲೂಕು ಜಿಲ್ಲೆಯ ವಾರದ ಪಾಸಿಟಿವಿಟಿ ಪ್ರಮಾಣವು 2% ಮೀರಿದರೆ, ವಾರದ ಪಾಸಿಟಿವಿಟಿ ಪ್ರಮಾಣವು 1% ಕಡಿಮೆಯಾಗುವವರೆಗೆ ಶಾಲೆಯನ್ನು ಮುಚ್ಚಿ ಆನ್‌ಲೈನ್ ತರಗತಿಗಳನ್ನು ನಡೆಸಲಾಗುತ್ತಿದೆ.<br>16. ಎಲ್ಲಾ ಬೋರ್ಡಿಂಗ್ ಶಾಲೆಗಳಲ್ಲಿ ಆರ್‌ಟಿಪಿಸಿಆರ್ ಫಲಿತಾಂಶವು ಬರುವರೆಗೂ ರೋಗಲಕ್ಷಣ ಹೊಂದಿದವರನ್ನು ಇರಿಸಲು ಗೊತ್ತುಪಡಿಸಿದ ಪ್ರತ್ಯೇಕ ಕೊಠಡಿ ವ್ಯವಸ್ಥೆ ಮಾಡಲಾಗಿದೆ.<br>17. ಶಿಕ್ಷಣ ಮತ್ತು ಆರೋಗ್ಯ ಇಲಾಖೆಗಳಿಂದ ತಲಾ ಒಬ್ಬ ಅಧಿಕಾರಿಯನ್ನು ಒಳಗೊಂಡ ತಾಲ್ಲೂಕು ಮಟ್ಟದಲ್ಲಿ ಒಬ್ಬ ಮೇಲ್ವಿಚಾರಣಾ ತಂಡವು ನಿಯಮಿತವಾಗಿ ಶಾಲೆಗಳಿಗೆ ಭೇಟಿ ನೀಡಿ ಪ್ರಮಾಣಿತ ಕಾರ್ಯಾಚರಣೆ ವಿಧಾನವನ್ನು ಖಚಿತಪಡಿಸಿಕೊಳ್ಳಲಾಗುತ್ತಿದೆ. |

**ಕಡತ ಸಂಖ್ಯೆ: ಆಕುಕ 858 ಚುರಪ್ರ 2021**

(ಡಾ॥ ಕೆ.ಸುಧಾಕರ್)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ**

**ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**